# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1244 |
| ಸದಸ್ಯರ ಹೆಸರು | : ಶ್ರೀ ಬಿ.ಜಿ ಪಾಟೀಲ್<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : 21-12-2018 |
| ಉತ್ತರಿಸುವ ಸಚಿವರು | : ಮಾನ್ಯ ನಗರಾಭಿವೃದ್ಧಿ ಮತ್ತು ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ನಗರದ ಪಟೇಲ್ ಚೌಕ್–ಜಗತ್‌ವರೆಗಿನ ಮುಖ್ಯರಸ್ತೆ ಅಭಿವೃದ್ಧಿ ಪಡಿಸಲಾಗುತ್ತಿದೆಯೇ; | ಕಲಬುರಗಿ ನಗರದ ಪಟೇಲ್ ಚೌಕ್–ಜಗತ್‌ವರೆಗಿನ ಮುಖ್ಯರಸ್ತೆ ಅಭಿವೃದ್ಧಿ ಪಡಿಸಲಾಗುತ್ತಿದೆ. |
| ಆ) | ಇದಕ್ಕೆ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; ಈ ಯೋಜನೆ ಯಾವ ಯಾವ ಕಾಮಗಾರಿಗಳನ್ನು ಒಳಗೊಂಡಿದೆ; (ಸಮಗ್ರ ಮಾಹಿತಿ ನೀಡುವುದು) | ಕಲಬುರ್ಗಿ ಮಹಾನಗರಪಾಲಿಕೆಗೆ ನಗರೋತ್ಥಾನ ಯೋಜನೆಯಡಿ ಮಂಜೂರು ಮಾಡಿರುವ ರೂ.40 ಕೋಟಿಗಳ ವಿಶೇಷ ಅನುದಾನದಿಂದ ರೂ.10.00 ಕೋಟಿ ಅನುದಾನವನ್ನು ಒದಗಿಸಲಾಗಿರುತ್ತದೆ. ಸದರಿ ಅನುದಾನದಲ್ಲಿ ಈ ಕೆಳಕಂಡ ಕಾಮಗಾರಿಗಳು ಒಳಗೊಂಡಿರುತ್ತವೆ.<br>1) ಸರದಾರ ವಲ್ಲಾಬಾಯಿ ಪಟೇಲ್, ಜಗತ್ ವೃತ್ತ ಅಭಿವೃದ್ಧಿ ಮತ್ತು ಟ್ರಾಫಿಕ್ ಐಲ್ಯಾಂಡ್, ಎರಡು ಬದಿಗಳಲ್ಲಿ ಚರಂಡಿ ಮತ್ತು ಕೇಬಲ್ ಡಕ್ಟ್ ಅಳವಡಿಸುವುದು, ಫುಟ್‌ಪಾತ್, ಎರಡು ಬದಿಗಳಲ್ಲಿ ಡಾಂಬರ್ ರಸ್ತೆ ಅಗಲೀಕರಣ 7.50 ಮೀಟರ್ ನಿಂದ 11.50 ಮೀಟರ್‌ನ ವರೆಗೆ ಮತ್ತು ರಸ್ತೆ ವಿಭಜಕವನ್ನು ಅಭಿವೃದ್ಧಿ ಪಡಿಸಲಾಗುತ್ತಿದೆ. |
| ಇ) | ಈ ರಸ್ತೆ ಕಾಮಗಾರಿ ವಿಳಂಬವಾಗಿ ನಡೆಯುತ್ತಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಕಾರಣಗಳೇನು; (ಮಾಹಿತಿ ನೀಡುವುದು) | ಸದರಿ ರಸ್ತೆಯಲ್ಲಿ ಚರಂಡಿ ಮತ್ತು ಡಕ್ಟ್ ಕಾಮಗಾರಿಯನ್ನು ಕೈಗೊಳ್ಳಲು ಪ್ರಾರಂಭಿಸಿದಾಗ ಕುಡಿಯುವ ನೀರಿನ ಪೈಪ್ ಲೈನ್ ಮತ್ತು ವಿದ್ಯುಚ್ಛಕ್ತಿ ಕೇಬಲ್‌ಗಳು ಹಾಗೂ ದೂರವಾಣಿ ಕೇಬಲ್‌ಗಳು ಬರುತ್ತಿರುವ ಕಾರಣ ಮಷಿನರಿಯಿಂದ ಮಾಡುವ ಬದಲು ಚರಂಡಿ ಮತ್ತು ಡಕ್ಟ್ ಅಗೆತವನ್ನು ವ್ಯಕ್ತಿಗಳಿಂದ ಮಾಡಿಸಲಾಗುತ್ತಿದ್ದು ಮತ್ತು 2018ರ ವಿಧಾನ ಸಭಾ ಚುನಾವಣೆ ವೇಳೆಯಲ್ಲಿ ದೂರ ಸಂಪರ್ಕ ಕೇಬಲ್‌ಗಳು ಕಡಿದು ಹೋಗುವ ಸಂಭವವಿರುವುದರಿಂದ ಚುನಾವಣೆ ವೇಳೆಯಲ್ಲಿ ಕಾಮಗಾರಿಯನ್ನು ತಡೆಹಿಡಿಯಲಾಗಿರುತ್ತದೆ. ಈ ಎಲ್ಲಾ ಕಾರಣಗಳಿಂದ ಕಾಮಗಾರಿಯು ವಿಳಂಬವಾಗಿರುತ್ತದೆ. |
| ಈ) | ಈ ರಸ್ತೆ ಕಾಮಗಾರಿ ಪೂರ್ಣಗೊಳ್ಳುವುದು ಯಾವಾಗ? (ವಿವರ ನೀಡುವುದು) | ಸದರಿ ಕಾಮಗಾರಿಯು ಎಡಭಾಗದಲ್ಲಿ ಕೆಲವೊಂದು ಆಸ್ತಿದಾರರು ರಸ್ತೆಯನ್ನು ಅತಿಕ್ರಮಣ ಮಾಡಿರುತ್ತಾರೆ. ಅತಿಕ್ರಮಣವನ್ನು ತೆರವುಗೊಳಿಸಲು ಭೂಮಾಪನ ಕಛೇರಿ ರವರಿಗೆ ಪತ್ರ ಬರೆಯಲಾಗಿದ್ದು ಅವರಿಂದ ಅಳತೆ ಮಾಡಿಸಿ ತೆರವುಗೊಳಿಸಲಾಗುವುದು ಮತ್ತು ಕಾಮಗಾರಿಯನ್ನು ಮಾರ್ಚ್–2019ರಲ್ಲಿ ಪೂರ್ಣಗೊಳಿಸಲು ಕ್ರಮವಹಿಸಲಾಗಿದೆ. ಸದರಿ ಕಾಮಗಾರಿಯು ಜಗತ್ ವೃತ್ತದಿಂದ ಎಸ್.ವಿ.ಪಿ. ವೃತ್ತದವರೆಗೆ ಬಲಭಾಗದಲ್ಲಿ ಚರಂಡಿ ಮತ್ತು ರಸ್ತೆ ಶೇ.80% ರಷ್ಟು ಪೂರ್ಣಗೊಂಡಿದ್ದು, ಎಡಭಾಗದಲ್ಲಿ ಶೇ.30% ರಷ್ಟು ಚರಂಡಿ ಕಾಮಗಾರಿ ಪೂರ್ಣಗೊಂಡಿದೆ. ಬಾಕಿ ಇರುವ ಕಾಮಗಾರಿಯನ್ನು ಮಾರ್ಚ್–2019ರಲ್ಲಿ ಪೂರ್ಣಗೊಳಿಸಲು ಯೋಜನೆ ರೂಪಿಸಲಾಗಿದೆ. |

ಸಂಖ್ಯೆ: ನಅಇ 277 ಎಸ್‌ಎಫ್‌ಸಿ 2018

(ಯು.ಟಿ ಖಾದರ್)
ನಗರಾಭಿವೃದ್ಧಿ ಮತ್ತು ವಸತಿ ಸಚಿವರು